# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | : | 810 |
| **ಮಾನ್ಯ ಸದಸ್ಯರ ಹೆಸರು** | : | ಶ್ರೀ ಹೆಚ್.ಎಂ.ರಮೇಶಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು) |
| **ಉತ್ತರಿಸಬೇಕಾದ ದಿನಾಂಕ** | : | 20-09-2021 |
| **ಉತ್ತರಿಸುವ ಸಚಿವರು** | : | ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು ಜೀವಿ ಪರಿಸ್ಥಿತಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕದಲ್ಲಿ ನೂತನ ಪ್ರವಾಸೋದ್ಯಮ ನೀತಿ ಜಾರಿಗೊಳಿಸಲಾಗಿದೆಯೇ; ಜಾರಿಗೊಳಿಸಿದ್ದಲ್ಲಿ, ನೂತನ ನೀತಿಗೆ ಅನುಗುಣವಾಗಿ ಯಾವ ಯಾವ ಹೊಸ ಯೋಜನೆಗಳನ್ನು ಕೈಗೊಳ್ಳಲಾಗಿದೆ; | ಹೌದು.<br><br>ಕರ್ನಾಟಕ ಪ್ರವಾಸೋದ್ಯಮ ನೀತಿ 2020-25 ಅನ್ನು ಮಾನ್ಯ ಪ್ರವಾಸೋದ್ಯಮ ಸಚಿವರು ದಿನಾಂಕ:27.09.2020 ರಂದು ಬಿಡುಗಡೆಗೊಳಿಸಿರುತ್ತಾರೆ.<br><br>ಮಾನ್ಯ ಪ್ರವಾಸೋದ್ಯಮ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ 24-06-2021 ರಂದು ನಡೆದ ಸಭೆಯಲ್ಲಿ ಕರ್ನಾಟಕ ಪ್ರವಾಸೋದ್ಯಮ ನೀತಿ 2020-25ರ ಸಂಬಂಧ ಹಲವು ತಿದ್ದುಪಡಿ ಮಾಡಲು ತೀರ್ಮಾನಿಸಲಾಗಿದ್ದು, ಅದರಂತೆ ತಿದ್ದುಪಡಿ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ.<br><br>ಈ ನೀತಿಗೆ ಕಾರ್ಯವಿಧಾನ ಮಾರ್ಗಸೂಚಿಗಳನ್ನು ಸಿದ್ಧಪಡಿಸುವ ಕಾರ್ಯ ಅಂತಿಮ ಹಂತದಲ್ಲಿರುತ್ತದೆ.<br><br>ಸದರಿ ನೀತಿಯ ಅವಧಿಯಲ್ಲಿ ಈ ಕೆಳಕಂಡ ಪ್ರವಾಸೋದ್ಯಮ ಪರಿಕಲ್ಪನೆಗಳ ಅಭಿವೃದ್ಧಿಗೆ ಆದ್ಯತೆಯನ್ನು ನೀಡಲು ಉದ್ದೇಶಿಸಲಾಗಿರುತ್ತದೆ. |

| | |
|---|---|
| 1 | ಸಾಹಸ ಪ್ರವಾಸೋದ್ಯಮ |
| 2 | ಕೃಷಿ ಪ್ರವಾಸೋದ್ಯಮ ಮತ್ತು ಗ್ರಾಮೀಣ ಪ್ರವಾಸೋದ್ಯಮ |
| 3 | ಕಾರವಾನ್ ಪ್ರವಾಸೋದ್ಯಮ |
| 4 | ಕರಾವಳಿ ಪ್ರವಾಸೋದ್ಯಮ ಮತ್ತು ಕಡಲತೀರ ಪ್ರವಾಸೋದ್ಯಮ. |
| 5 | ಸಾಂಸ್ಕೃತಿಕ ಪ್ರವಾಸೋದ್ಯಮ |
| 6 | ಪಾರಂಪರಿಕ ಪ್ರವಾಸೋದ್ಯಮ |
| 7 | ಪರಿಸರ ಪ್ರವಾಸೋದ್ಯಮ |
| 8 | ಶಿಕ್ಷಣ ಪ್ರವಾಸೋದ್ಯಮ |
| 9 | ಚಲನಚಿತ್ರ ಪ್ರವಾಸೋದ್ಯಮ |
| 10 | ಪಾಕಶಾಸ್ತ್ರ ಪ್ರವಾಸೋದ್ಯಮ |
| 11 | ಒಳನಾಡು ಜಲ ಪ್ರವಾಸೋದ್ಯಮ |
| 12 | ನೌಕಯಾನ ವಿಹಾರ ಪ್ರವಾಸೋದ್ಯಮ |
| 13 | ಮೈಸ್ ಮತ್ತು ವ್ಯಾವಹಾರಿಕ ಪ್ರವಾಸೋದ್ಯಮ |
| 14 | ಗಣಿಗಾರಿಕೆ ಪ್ರವಾಸೋದ್ಯಮ |
| 15 | ಆಧ್ಯಾತ್ಮಿಕ ಪ್ರವಾಸೋದ್ಯಮ |
| 16 | ಕ್ರೀಡಾ ಪ್ರವಾಸೋದ್ಯಮ |
| 17 | ಸ್ವಾಸ್ಥ್ಯ ಪ್ರವಾಸೋದ್ಯಮ |

......2

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಆ)</td><td>ಕರ್ನಾಟಕದಲ್ಲಿ ಕಳೆದ ಮೂರು ವರ್ಷಗಳಲ್ಲಿ ಪ್ರವಾಸೋದ್ಯಮ ಅಭಿವೃದ್ಧಿಗಾಗಿ ಎಷ್ಟು ಪ್ರವಾಸೋದ್ಯಮ ಮಳಿಗೆಗಳನ್ನು ತೆರೆಯಲಾಗಿದೆ; ಕಳೆದ ಮೂರು ವರ್ಷಗಳಲ್ಲಿ ರಾಜ್ಯದ ಜಿಡಿಪಿ ಬೆಳವಣಿಗೆಯಲ್ಲಿ ಪ್ರವಾಸೋದ್ಯಮ ಇಲಾಖೆಯ ಶೇಕಡವಾರು ಕೊಡುಗೆ ಎಷ್ಟು;</td><td>
ಪ್ರವಾಸೋದ್ಯಮ ಇಲಾಖೆಯಿಂದ ಕರ್ನಾಟಕದಲ್ಲಿ ಕಳೆದ ಮೂರು ವರ್ಷಗಳಲ್ಲಿ ಯಾವುದೇ ಮಳಿಗೆಗಳನ್ನು ತೆರೆದಿರುವುದಿಲ್ಲ.
ಕರ್ನಾಟಕದಲ್ಲಿ ಕಳೆದ ಮೂರು ವರ್ಷಗಳಲ್ಲಿ ಕರ್ನಾಟಕ ವಸ್ತು ಪ್ರದರ್ಶನ ಪ್ರಾಧಿಕಾರ ಮೈಸೂರು ರವರಿಂದ ಈ ಕೆಳಕಂಡಂತೆ ಮಳಿಗೆಗಳನ್ನು ತೆರೆಯಲಾಗಿರುತ್ತದೆ.
<table>
<tr><th>ಕ್ರ. ಸಂ.</th><th>ಮಳಿಗೆಗಳ ವಿವರ</th><th>2018ರಲಿ ತೆರೆದಿರುವ ಮಳಿಗೆಗಳ ಸಂಖ್ಯೆ</th><th>2019ರಲ್ಲಿ ತೆರೆದಿರುವ ಮಳಿಗೆಗಳ ಸಂಖ್ಯೆ</th><th>2020 ರಲ್ಲಿ ದಸರಾ ವಸ್ತು ಪ್ರದರ್ಶನ ಆಯೋಜಿಸಿರುವುದಿಲ್ಲ.</th></tr>
<tr><td>1</td><td>ಜಿಲ್ಲಾ ಪಂಚಾಯತ್ ಮಳಿಗೆಗಳು</td><td>07</td><td>06</td><td rowspan="5">ಕೋವಿಡ್-19ರ ಕೊರೊನಾ ವೈರಸ್ ಸೋಂಕು ರೋಗದ ನಿಯಂತ್ರಣ ಸಂಬಂಧ ದಸರಾ ವಸ್ತುಪ್ರದರ್ಶನ ಆಯೋಜಿಸಿರುವುದಿಲ್ಲ.</td></tr>
<tr><td>2</td><td>ನಿಗಮ, ಮಂಡಳಿ, ಸಂಸ್ಥೆಗಳ ಮಳಿಗೆಗಳು</td><td>21</td><td>19</td></tr>
<tr><td>3</td><td>ಕೇಂದ್ರ ಸರ್ಕಾರದ ಮಳಿಗೆಗಳು</td><td>01</td><td>02</td></tr>
<tr><td>4</td><td>ರಾಜ್ಯ ಸರ್ಕಾರದ ಮಳಿಗೆಗಳು</td><td>14</td><td>16</td></tr>
<tr><td>5</td><td>ಇತರ ಸಂಘ-ಸಂಸ್ಥೆಗಳು</td><td>-</td><td>01</td></tr>
<tr><td></td><td>ಒಟ್ಟು</td><td>43</td><td>44</td><td></td></tr>
</table>
ಮೇಲ್ಕಂಡ ಸರ್ಕಾರಿ ಮಳಿಗೆಗಳನ್ನು ಹೊರತುಪಡಿಸಿ, 2018ನೇ ಸಾಲಿನಲ್ಲಿ 143 ವಾಣಿಜ್ಯ ಮಳಿಗೆಗಳು, 46 ಆಹಾರ ಮಳಿಗೆಗಳು ಹಾಗೂ 2019ನೇ ಸಾಲಿನಲ್ಲಿ 143 ವಾಣಿಜ್ಯ ಮಳಿಗೆಗಳು, 55 ಆಹಾರ ಮಳಿಗೆಗಳು ಪ್ರಾಧಿಕಾರದಿಂದ ಭಾಗವಹಿಸಿರುತ್ತವೆ.
ಪ್ರವಾಸೋದ್ಯಮ ಕ್ಷೇತ್ರದಿಂದ ರಾಜ್ಯದ ಜಿಡಿಪಿ ಬೆಳವಣಿಗೆಯಲ್ಲಿ ಪ್ರವಾಸೋದ್ಯಮ ಕ್ಷೇತ್ರದ ಕೊಡುಗೆಯನ್ನು ಗುರುತಿಸುವ ಸಂಬಂಧ ಇಲಾಖೆಯಿಂದ ಯಾವುದೇ ಸಮೀಕ್ಷೆಯನ್ನು ನಡೆಸಿರುವುದಿಲ್ಲ.
ಕೇಂದ್ರ ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯವು ಸ್ಥಾಪಿಸಿರುವ ಇಂಡಿಯನ್ ಬ್ರ್ಯಾಂಡ್ ಇಕ್ವಿಟಿ ಫೌಂಡೇಷನ್ (IBEF) ಟ್ರಸ್ಟ್‌ನ ವರದಿಯನ್ವಯ 2019-20ನೇ ಸಾಲಿನಲ್ಲಿ ಪ್ರವಾಸೋದ್ಯಮ ಕ್ಷೇತ್ರದಿಂದ ರಾಜ್ಯದ ಜಿಡಿಪಿ ಬೆಳವಣಿಗೆಗೆ ಶೇ.14.8% ರಷ್ಟು ಕೊಡುಗೆಯನ್ನು ನೀಡಲಾಗಿರುತ್ತದೆ ಎಂದು ಉಲ್ಲೇಖವಾಗಿರುತ್ತದೆ.
</td></tr>
<tr><td>ಇ)</td><td>ಜಾಗತಿಕ ಪ್ರವಾಸೋದ್ಯಮ ಸಮಾವೇಶ ಕೈಗೊಳ್ಳಲು ಪ್ರವಾಸೋದ್ಯಮ ಇಲಾಖೆ ಕೈಗೊಂಡಿರುವ ಕ್ರಮಗಳೇನು; ಪ್ರವಾಸೋದ್ಯಮ ಅಭಿವೃದ್ಧಿಗಾಗಿ ಪ್ರವಾಸೋದ್ಯಮ ಸ್ಥಳಗಳಲ್ಲಿ ಹೋಟೆಲ್‌ಗಳನ್ನು ಹಾಗೂ ತಂಗುದಾಣಗಳನ್ನು ನಿರ್ಮಿಸಲು ಮತ್ತು ಹೋಟೆಲ್ ಉದ್ಯಮಕ್ಕೆ ಉತ್ತೇಜನ ನೀಡಲು ಸರ್ಕಾರ ಯಾವ ಯೋಜನೆಗಳನ್ನು ಹಮ್ಮಿಕೊಂಡಿದೆ;</td><td>
2020-21ನೇ ಸಾಲಿನ ಮಾನ್ಯ ಮುಖ್ಯಮಂತ್ರಿಗಳ ಆಯವ್ಯಯ ಭಾಷಣದಲ್ಲಿ ಪ್ರವಾಸಿ ಕ್ಷೇತ್ರಗಳಲ್ಲಿ ಹೆಚ್ಚಿನ ಹೂಡಿಕೆದಾರರನ್ನು ಆಕರ್ಷಿಸಿ, ರಾಜ್ಯದ ಯುವಕರಿಗೆ ಹೆಚ್ಚಿನ ಉದ್ಯೋಗಾವಕಾಶ ಕಲ್ಪಿಸಿಕೊಡಲು ಜಾಗತಿಕ ಪ್ರವಾಸೋದ್ಯಮ ಹೂಡಿಕೆದಾರರ ಸಮಾವೇಶ (Global Tourism Investors Meet) ಅನ್ನು ಆಯೋಜಿಸಲಾಗುವುದು ಎಂದು ಘೋಷಿಸಲಾಗಿರುತ್ತದೆ. ಆದರೆ 2020-21ನೇ ಸಾಲಿನಲ್ಲಿ ಕೋವಿಡ್-19ರ ಸಾಂಕ್ರಾಮಿಕ ರೋಗದ ಹಿನ್ನೆಲೆಯಲ್ಲಿ ಜಾಗತಿಕ ಪ್ರವಾಸೋದ್ಯಮ ಹೂಡಿಕೆದಾರರ ಸಮಾವೇಶವನ್ನು ಆಯೋಜಿಸಲಾಗಿರುವುದಿಲ್ಲ. ಸದರಿ ಸಮಾವೇಶವನ್ನು 2021-22ನೇ ಸಾಲಿನಲ್ಲಿ ಆಯೋಜಿಸುವ ಬಗ್ಗೆ ಪರಿಶೀಲಿಸಲಾಗುತ್ತಿದೆ.
ಪ್ರವಾಸೋದ್ಯಮ ಇಲಾಖೆಯಿಂದ ತಂಗುದಾಣಗಳನ್ನು ನಿರ್ಮಿಸುವ ಯೋಜನೆಗಳನ್ನು ಹಮ್ಮಿಕೊಂಡಿರುವುದಿಲ್ಲ. ಆದರೆ ರಾಜ್ಯಾದ್ಯಂತ ಇರುವ ಪ್ರವಾಸಿ ತಾಣಗಳ ಬಳಿ ರಸ್ತೆ ಬದಿ ಸೌಲಭ್ಯ (Wayside Amenities) ಹಾಗೂ ಆದ್ಯತಾ ಪ್ರವಾಸಿ ತಾಣಗಳೆಂದು ಗುರುತಿಸಿರುವ ಸ್ಥಳಗಳಲ್ಲಿ ಹೋಟೆಲ್ ಯೋಜನೆ (ಬಜೆಟ್) /ಹೋಟೆಲ್ ಯೋಜನೆ (ಪ್ರೀಮಿಯಂ) ನಿರ್ಮಿಸಲು ಮುಂದೆ ಬರುವ ಅರ್ಹ ಆಸಕ್ತದಾರರಿಗೆ ಬಂಡವಾಳ ಹೂಡಿಕೆ ಸಹಾಯಧನವನ್ನು ನೀಡಲು ಉದ್ದೇಶಿಸಲಾಗಿರುತ್ತದೆ.
</td></tr>
</table>

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಈ) | ಚಿಕ್ಕಬಳ್ಳಾಪುರ ತಾಲ್ಲೂಕಿನ ನಂದಿ ಬೆಟ್ಟಕ್ಕೆ ರೂಪ್‌ವೇ ನಿರ್ಮಿಸುವ ಯೋಜನೆ ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಇದರ ಸಮರ್ಪಕ ಜಾರಿಗೆ ಕೈಗೊಂಡಿರುವ ಕ್ರಮಗಳೇನು; ರಾಜ್ಯದ ಎಷ್ಟು ಪ್ರವಾಸೋದ್ಯಮ ಕ್ಷೇತ್ರಗಳಲ್ಲಿ ರೂಪ್‌ವೇ ನಿರ್ಮಿಸುವ ಯೋಜನೆ ಸರ್ಕಾರದ ಮುಂದಿದೆಯೇ; | ಚಿಕ್ಕಬಳ್ಳಾಪುರ ತಾಲ್ಲೂಕಿನ ನಂದಿ ಬೆಟ್ಟಕ್ಕೆ ರೋಪ್-ವೇಯನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವ (ಪಿಪಿಪಿ) ಮಾದರಿಯಲ್ಲಿ ಅಳವಡಿಸುವ ಯೋಜನೆಯ ವಹಿವಾಟು ಸಲಹೆಗಾರ ಹಾಗೂ ಯೋಜನಾ ನಿರ್ವಹಣೆಗಾರರಾಗಿ ಮೆ: ಐಡೆಕ್ ಸಂಸ್ಥೆಯನ್ನು ಆರ್ಥಿಕ ಇಲಾಖೆಯ ಅಧಿಸೂಚನೆ ಸಂಖ್ಯೆ: ಆಇ/141/ವೆಚ್ಚ-12/2021, ದಿನಾಂಕ:30.04.2021 ರನ್ವಯ ಕ.ಟಿ.ಟಿ.ಪಿ. ನಿಯಮಗಳಡಿ 4ಜಿ ವಿನಾಯಿತಿ ನೀಡಲಾಗಿದೆ.<br><br>ಅದರಂತೆ, ಈಗಾಗಲೇ ಮೆ: ಐಡೆಕ್ ಸಂಸ್ಥೆಯೊಂದಿಗೆ ದಿನಾಂಕ:13.08.2021 ರಂದು ಕರಾರು ಮಾಡಿಕೊಳ್ಳಲಾಗಿರುತ್ತದೆ. ಈ ಯೋಜನೆಯ ಅನುಷ್ಠಾನದ ಕುರಿತಂತೆ ಮೆ: ಐಡೆಕ್ ಸಂಸ್ಥೆಯು ಕರಡು ಆರ್.ಎಫ್.ಪಿ. ದಾಖಲೆ ತಯಾರಿಸಿದ್ದು, ಸದರಿ ದಾಖಲೆಗಳನ್ನು ಪರಿಶೀಲಿಸಿ ಟೆಂಡರ್ ಕರೆಯುವ ಹಂತದಲ್ಲಿರುತ್ತದೆ.<br><br>ರಾಜ್ಯದಲ್ಲಿ ಈ ಕೆಳಕಂಡ ಪ್ರವಾಸಿ ತಾಣಗಳಲ್ಲಿ ರೋಪ್-ವೇ ನಿರ್ಮಿಸಲು ಪರಿಶೀಲಿಸಲಾಗುತ್ತಿದೆ. |

| ಕ್ರ.ಸಂ. | ಜಿಲ್ಲೆ ಹೆಸರು | ಪ್ರವಾಸಿ ತಾಣಗಳು |
|---|---|---|
| 1. | ಮೈಸೂರು | ಚಾಮುಂಡಿ ಬೆಟ್ಟ |
| 2. | ತುಮಕೂರು | ಮಧುಗಿರಿ ಏಕಶಿಲಾ ಬೆಟ್ಟ |
| 3. | ಚಿಕ್ಕಮಗಳೂರು | ಕೆಮ್ಮಣ್ಣುಗುಂಡಿ |
| 4. | ಯಾದಗಿರಿ | ಯಾದಗಿರಿ ಬೆಟ್ಟ |
| 5. | ಮಂಡ್ಯ, ಚಾಮರಾಜನಗರ | ಗಗನಚುಕ್ಕಿ-ಭರಚುಕ್ಕಿ |
| 6. | ಶಿವಮೊಗ್ಗ | ಕೊಡಚಾದ್ರಿ |
| 7. | ಕೊಪ್ಪಳ | ಅಂಜನಾದ್ರಿ ಬೆಟ್ಟ |
| 8. | ಬಳ್ಳಾರಿ | ಬಳ್ಳಾರಿ ಕೋಟೆ |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಉ) | ಪ್ರವಾಸಿ ಸ್ಥಳಗಳಲ್ಲಿ ತಂಗುದಾಣ, ಹೋಟೆಲ್, ರೆಸಾರ್ಟ್ ಹಾಗೂ ಇನ್ನಿತರ ಸೇವಾ ಸೌಲಭ್ಯಗಳನ್ನು ಒದಗಿಸುವ ಕೈಗಾರಿಕೆಗಳಿಗೆ ಸರ್ಕಾರ ಯಾವ ರೀತಿ ಉತ್ತೇಜನ ನೀಡುತ್ತಿದೆ? (ವಿವರ ಒದಗಿಸುವುದು) | ಪ್ರವಾಸೋದ್ಯಮ ನೀತಿ 2020-25ರಲ್ಲಿ ಇಲಾಖೆಯು ಗುರುತಿಸಿರುವ ಪ್ರವಾಸಿ ತಾಣಗಳಲ್ಲಿ ಹೋಟೆಲ್, ರೆಸಾರ್ಟ್ ಹಾಗೂ ಇನ್ನಿತರೆ ಸೇವಾ ಸೌಲಭ್ಯಗಳನ್ನು ಒದಗಿಸಲು ಮುಂದೆ ಬರುವ ಅರ್ಹ ಆಸಕ್ತದಾರರಿಗೆ ಬಂಡವಾಳ ಹೂಡಿಕೆ ಸಹಾಯಧನ, ಪ್ರೋತ್ಸಾಹಧನ ಹಾಗೂ ರಿಯಾಯಿತಿಗಳನ್ನು ನೀಡಲು ಉದ್ದೇಶಿಸಲಾಗಿರುತ್ತದೆ. ಈ ನೀತಿಯ ಕಾರ್ಯವಿಧಾನ ಮಾರ್ಗಸೂಚಿಗಳನ್ನು ಸಿದ್ಧಪಡಿಸುವ ಕಾರ್ಯ ಅಂತಿಮ ಹಂತದಲ್ಲಿರುತ್ತದೆ. |

**TOR 212 TDV 2021**

**(ಆನಂದ್ ಸಿಂಗ್)**
ಪ್ರವಾಸೋದ್ಯಮ ಹಾಗೂ
ಪರಿಸರ ಮತ್ತು ಜೀವಿ ಪರಿಸ್ಥಿತಿ ಸಚಿವರು